ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ದೇವರಾಜು ಅರಸು ವಿದೇಶಿ ವ್ಯಾಸಂಗ ವೇತನ ಯೋಜನೆ ಬಗ್ಗೆ

ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು) –

364 (349) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) "ದೇವರಾಜ ಅರಸು ವಿದೇಶಿ ವ್ಯಾಸಂಗ ವೇತನ ಯೋಜನೆ"ಯನ್ನು ಯಾವ ವರ್ಷದಿಂದ ಜಾರಿಗೆ ತರಲಾಗಿದೆ; ಈ ಯೋಜನೆಯ ರೂಪುರೇಷೆಗಳೇನು; (ಸಂಪೂರ್ಣ ಮಾಹಿತಿ ನೀಡಿವುದು)

(ಆ) ಈ ಯೋಜನೆಯು ಜಾರಿಯಾದಾಗಿನಿಂದ ಇದುವರೆವಿಗೂ ಸರ್ಕಾರ ಮೀಸಲಿಟ್ಟ ಅನುದಾನವೆಷ್ಟು; ಖರ್ಚು ಮಾಡಲಾದ ಅನುದಾನವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ಯೋಜನೆಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವಾಗ ಅನುಸರಿಸಲಾಗುವ ಮಾನದಂಡಗಳೇನು; ಆಯ್ಕೆಯಾದ ಪ್ರತಿ ವಿದ್ಯಾರ್ಥಿಗೆ ನೀಡಿರುವ ಅನುದಾನದ ಮೊತ್ತವೆಷ್ಟು;

(ಈ) ಇತ್ತೀಚೆಗೆ "ದೇವರಾಜ ಅರಸು ವಿದೇಶಿ ವ್ಯಾಸಂಗ ವೇತನ ಯೋಜನೆ" ಅಡಿಯಲ್ಲಿ ರಾಜ್ಯ ಸರ್ಕಾರ ಸಾಕಷ್ಟು ಅನುದಾನ ಒದಗಿಸದಿರುವುದರಿಂದ ಮತ್ತು ಪ್ರತಿ ವಿದ್ಯಾರ್ಥಿಗೆ ನೀಡುವ ವೇತನದ ಮೊತ್ತವನ್ನು ಕಡಿತಗೊಳಿಸಿರುವುದರಿಂದ, ಹಿಂದುಳಿದ ವರ್ಗಕ್ಕೆ ಸೇರಿದ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಅನ್ಯಾಯ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಅನ್ಯಾಯವನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು)